ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 22ನೇ ಸೆಪ್ಟಂಬರ್, 2020

ಸರ್ಕಾರ ಕೈಗೊಂಡಿರುವ ಬೆಳೆ ಸಮೀಕ್ಷೆಗಳ ಬಗ್ಗೆ

ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

221 (286) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಸರ್ಕಾರದಿಂದ ಕೈಗೊಳ್ಳುತ್ತಿರುವ ಬೆಳೆ ಸಮೀಕ್ಷೆ ದಾಖಲೆಯನ್ನು ಸರ್ಕಾರದಿಂದ ದೊರೆಯುವ ಎಲ್ಲಾ ಸವಲತ್ತುಗಳಿಗೆ ಕಡ್ಡಾಯವಾಗಿ ಪರಿಗಣಿಸಲಾಗುವುದೇ ; ಹಾಗಿದ್ದಲ್ಲಿ, ಇದಕ್ಕೆ ಅನುಸರಿಸುತ್ತಿರುವ ಮಾನದಂಡಗಳೇನು ;

(ಆ) ಬೆಳೆ ಸಮೀಕ್ಷೆಯಲ್ಲಿ ಉಂಟಾಗುವ ವ್ಯತ್ಯಾಸಗಳಿಗೆ ಕೈಗೊಳ್ಳಬೇಕಾದ ಪರ್ಯಾಯ ಕ್ರಮಗಳು ಯಾವುವು ;

(ಇ) ಬೆಳೆ ವಿಮೆಯ ಕಂತನ್ನು ರೈತರು ಬ್ಯಾಂಕ್‌ಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸಲಾಗಿದೆಯೇ ; ಇದರಿಂದ ರೈತರಿಗೆ ಆಗುತ್ತಿರುವ ತೊಂದರೆಗಳು ಸರ್ಕಾರದ ಗಮನಕ್ಕೆ ಬಂದಿವೆಯೇ ; ಬಂದಿದ್ದಲ್ಲಿ, ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ;

(ಈ) ರೈತರ ಬೆಳೆ ವಿಮೆ ಕಂತನ್ನು ಪಾವತಿಸಲು ಹೋಬಳಿ ಕೇಂದ್ರಗಳಲ್ಲಿರುವ ಸಿಎಸ್‌ಸಿ ಅಂಚೆ ಕಛೇರಿ ಅಥವಾ ಭಾರತೀಯ ಜೀವ ವಿಮಾ ನಿಗಮ ಕಛೇರಿಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸಲು ಇರುವ ಅಡಚಣೆಗಳು ಏನು ;

(ಉ) ನೋಂದಾಯಿತ ಏಜೆಂಟ್‌ಗಳ ಮುಖಾಂತರ ಪಾವತಿಸಲು ಅವಕಾಶವಿದೆಯೇ ; ಇಲ್ಲವಾದಲ್ಲಿ ಯಾವ ಕಾರಣಕ್ಕೆ ನೀಡಿರುವುದಿಲ್ಲ; ಇದರಿಂದ ಸರ್ಕಾರಕ್ಕೆ ಆಗುವ ತೊಂದರೆ ಏನು?